# ವಿಶೇಷ ಪತ್ರಿಕೆ

| ಭಾಗ – III | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೦ |
|---|---|---|

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಆರ್‌ಡಿ 87 ಎಲ್‌ಜಿಎ 2009, ಬೆಂಗಳೂರು, ದಿನಾಂಕ : 8ನೇ ಸೆಪ್ಟೆಂಬರ್, 2009**

**ನಮೂನೆ 29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ – ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ – ಪ್ರಕರಣದಿಂದ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ತಹಶೀಲ್ದಾರ್, ಕುಂದಾಪುರ ರವರು ಹೊರಡಿಸಿದ 10.01.2008 ರ ದಿನಾಂಕದ ಪಿ.ಪಿ.ಡಿ.ಆರ್./32/07–08ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಪೊರಂಬೋಕು ಜಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಉಡುಪಿ ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಸದರಿ ಪೊರಂಬೋಕು ಜಾಗದ ಮೇಲಿನ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಗ್ರಾಮ | ಕುಂದಾಪುರ ಕಸಬಾ |
| ತಾಲ್ಲೂಕು | ಕುಂದಾಪುರ |
| ಜಿಲ್ಲೆ | ಉಡುಪಿ |
| ವಿವರ | ಖುಷ್ಕಿ ಖರಾಬು ಸ.ನಂ. 99–10ಬಿ |
| ವಿಸ್ತೀರ್ಣ | 0–32 ಎಕರೆ |
| ಎಲ್ಲೆಗಳು | ಪೂರ್ವಕ್ಕೆ : ಸ.ನಂ. 99/6ಎ, 7/10ಬಿ ಅಂಶ<br>ಪಶ್ಚಿಮಕ್ಕೆ : ಸ.ನಂ. 99/10ಬಿ ಅಂಶ<br>ಉತ್ತರಕ್ಕೆ : ಸ.ನಂ. 77/8, 99/10ಬಿ ಅಂಶ, 99/7 ಅಂಶ<br>ದಕ್ಷಿಣಕ್ಕೆ : ಸ.ನಂ. 99/10 ಬಿ ಅಂಶ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ. ಮಂ.)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೧ |
|---|---|---|

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ನಅಇ 50 ಎಸಿಜಿ 2009, ಬೆಂಗಳೂರು, ದಿನಾಂಕ : 11ನೇ ಸೆಪ್ಟೆಂಬರ್, 2009**

ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ಅಧಿನಿಯಮ 1976 ರ ಸೆಕ್ಷನ್ 7(ಬಿ) ರನ್ವಯ ಸರ್ಕಾರವು ಈ ಕೆಳಕಂಡವರನ್ನು ಗುಲ್ಬರ್ಗಾ ಮಹಾನಗರಪಾಲಿಕೆಗೆ ಮುಂದಿನ ಆದೇಶದವರೆಗೆ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿದೆ.

| | |
|---|---|
| 1. | ಶ್ರೀ ವರಧಾಶಂಕರಶೆಟ್ಟಿ, ತಂದೆ : ರಾಮಶೆಟ್ಟಿ,<br>ಮನೆ ನಂ. 7–1101/17/ಎ/ಎಸ್.ಬಿ.ಹೆಚ್. ಬ್ಯಾಂಕ್ ಕಾಲೋನಿ, ನೆಹರು ಗಂಜ ಆದರ್ಶ ಶಾಲೆಯ ಹತ್ತಿರ, ಗುಲ್ಬರ್ಗಾ. |
| 2. | ಶ್ರೀ ಅಮೃತಸಾಗರ, ಮನೆ ನಂ. 5–2685, ರಾಮಜೀನಗರ ರೋಜಾ (ಕೆ) ಗುಲ್ಬರ್ಗಾ – 585104. |

| | |
|---|---|
| 3. | ಶ್ರೀ ತಾರಾಚಂದ ಶ್ಯಾಮಸುಂದರ ತಿವಾರಿ,<br>ಮನೆ ನಂ. 9/279, ಕಟಗರಪೂರ, ಶಹಾಬಜಾರ್, ಗುಲ್ಬರ್ಗಾ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಆರ್. ಮಹೇಶ್‌ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೨ |
|---|---|---|

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಾರಿಇ 33 ಸಾಇಪ 2007, ಬೆಂಗಳೂರು ದಿನಾಂಕ : 29ನೇ ಆಗಸ್ಟ್, 2009**

ಕೇಂದ್ರ ಮೋಟಾರು ವಾಹನ ಕಾಯ್ದೆ 1988 ರ ಕಲಂ 67(1) (1988ರ ಕೇಂದ್ರ ಕಾಯ್ದೆ 59) ಅಡಿಯಲ್ಲಿ ಕರ್ನಾಟಕ ಸರ್ಕಾರವು ಸದರಿ ಕಾಯ್ದೆಯ ಉಪ ಕಲಂ 1(ಎ)ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ರಾಜ್ಯದಲ್ಲಿ ಎಲ್.ಪಿ.ಜಿ. ರೆಟ್ರೋಫಿಟ್‌ಮೆಂಟ್ ಮತ್ತು ರೀ–ಫಿಲ್ಲಿಂಗ್ ಕೇಂದ್ರಗಳು ಲಭ್ಯವಿರುವ ಪ್ರಾದೇಶಿಕ ಸಾರಿಗೆ ಪ್ರಾಧಿಕಾರಗಳಿಗೆ ಈ ಕೆಳಕಂಡ ನಿರ್ದೇಶನಗಳನ್ನು ನೀಡಲಾಗಿದೆ.

**ನಿರ್ದೇಶನಗಳು**

ಕರ್ನಾಟಕದಲ್ಲಿ ಮೈಸೂರು, ಬೆಳಗಾವಿ, ಗುಲ್ಬರ್ಗಾ, ಉಡುಪಿ, ತುಮಕೂರು, ದಾವಣಗೆರೆ, ಶಿವಮೊಗ್ಗ ಮತ್ತು ಹಾಸನಗಳಲ್ಲಿ ನಗರಸಭೆ, ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಯಾವ ಸ್ಥಳಗಳಲ್ಲಿ ಎಲ್.ಪಿ.ಜಿ. ರೆಟ್ರೋಫಿಟ್‌ಮೆಂಟ್ ಮತ್ತು ಮರು ಇಂಧನ ಪೂರೈಕೆ ಸೌಲಭ್ಯ ಹೊಂದಲಾಗಿದೆಯೋ ಅಂತಹ ಸ್ಥಳಗಳಲ್ಲಿ 4 ಸ್ಟ್ರೋಕ್ ಇಂಜಿನ್ ಹೊಂದಿರುವ ಎಲ್.ಪಿ.ಜಿ. (ದ್ವಿ–ಇಂಧನ) ಆಟೋ ರಿಕ್ಷಾ ಕ್ಯಾಬ್‌ಗಳನ್ನು ಮಾತ್ರ ನೊಂದಾಯಿಸಲು ಹಾಗೂ ಎಲ್.ಪಿ.ಜಿ. ಸೌಲಭ್ಯ ಇಲ್ಲದೇ ಇರುವ ಪ್ರಾದೇಶಿಕ/ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಗಳ ವ್ಯಾಪ್ತಿಯಲ್ಲಿ 4 ಸ್ಟ್ರೋಕ್ ಇಂಜಿನ್ ಪೆಟ್ರೋಲ್ ಆಟೋರಿಕ್ಷಾ ಕ್ಯಾಬ್‌ಗಳನ್ನು ಮಾತ್ರ ದಿನಾಂಕ : 01–10–2009 ರಿಂದ ಜಾರಿಗೆ ಬರುವಂತೆ ನೊಂದಣಿ ಮಾಡಲು ಕಡ್ಡಾಯಗೊಳಿಸಿದೆ.

ದಿನಾಂಕ : 31–10–2008 ರ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಾರಿಇ 33 ಸಾಇಪ 2007 ಅನ್ನು ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ಆರ್. ಚಂದ್ರಶೇಖರಾರಾಧ್ಯ**
ಪೀಠಾಧಿಕಾರಿ, ಸಾರಿಗೆ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೩ |
|---|---|---|

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 72 ಶಿಸನೇ 2009 (ಭಾ), ಬೆಂಗಳೂರು ದಿನಾಂಕ : 14ನೇ ಆಗಸ್ಟ್, 2009**

3ನೇ ಹಣಕಾಸು ಆಯೋಗವು ಪಂಚಾಯತ್ ರಾಜ್ ಸಂಸ್ಥೆಗಳು ಮತ್ತು ನಗರ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸಲು ನೀಡಿರುವ ಶಿಫಾರಸ್ಸುಗಳ ಅನುಷ್ಠಾನಗೊಳಿಸುವ ಕಾರ್ಯಪಡೆಯ ಅಧ್ಯಕ್ಷರಾದ ಶ್ರೀ ಎ.ಜಿ. ಕೊಡ್ಗಿ ಇವರಿಗೆ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ತಿಪ್ಪೇಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ರಾಜ್ಯ ಶಿಷ್ಟಾಚಾರ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೪ |
|---|---|---|

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 59 ಶಿಸನೇ 2009, ಬೆಂಗಳೂರು ದಿನಾಂಕ : 31ನೇ ಆಗಸ್ಟ್, 2009**

ಶ್ರೀ ಸಿ.ಎನ್. ಮಂಜೇಗೌಡ, ಅಧ್ಯಕ್ಷರು, ಕೇಂದ್ರ ಪರಿಹಾರ ಸಮಿತಿ, ಬೆಂಗಳೂರು ಇವರಿಗೆ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ರಾಜ್ಯ ಸಚಿವರ ಸ್ಥಾನಮಾನವನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ರಾಜ್ಯ ಶಿಷ್ಟಾಚಾರ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೫ |
|---|---|---|

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಇ 169 ಎಂಎಲ್‌ಡಬ್ಲ್ಯೂ 2009, ಬೆಂಗಳೂರು ದಿನಾಂಕ : 8ನೇ ಸೆಪ್ಟೆಂಬರ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಇ 176 ಎಂಆರ್‌ಇ 2009 ದಿನಾಂಕ : 03/08/2009 ರಲ್ಲಿ ಶ್ರೀ ಎಂ. ವೀರಣ್ಣ ಬಿನ್ ಲೇ: ಚನ್ನಬಸಣ್ಣ, ಹೊಸಪಾರ್ಕ್ ಹತ್ತಿರ, ಗಾಂಧಿನಗರ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇವರನ್ನು ಚಳ್ಳಕೆರೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ನಾಮನಿರ್ದೇಶನ ಮಾಡಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೬ |
|---|---|---|

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಇ 190 ಎಂಆರ್‌ಇ 2009, ಬೆಂಗಳೂರು ದಿನಾಂಕ : 10ನೇ ಸೆಪ್ಟೆಂಬರ್, 2009**

ಸರ್ಕಾರದ ಅಧಿಸೂಚನೆ ಸಂಖ್ಯೆ : ಸಇ 208 ಎಂಆರ್‌ಇ 2008 ದಿನಾಂಕ : 26/08/2008 ರಲ್ಲಿ ಕೋಲಾರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ನಾಮನಿರ್ದೇಶನ ಮಾಡಲಾಗಿದ್ದ (1) ಶ್ರೀ ಹೆಚ್. ಕೃಷ್ಣೇಗೌಡ ಬಿನ್ ಎ. ನಾರಾಯಣಪ್ಪ, ಹೊನ್ನೇನಹಳ್ಳಿ, (2) ಶ್ರೀ ಕೃಷ್ಣಪ್ಪ ಬಿನ್ ಸೊಣ್ಣಪ್ಪ, ಮುದುವತ್ತಿ ಮತ್ತು (3) ಶ್ರೀ ಸೈಯ್ಯದ್ ಪಾಷಾ, ಬಿನ್ ದಸ್ತಗಿರಿಸಾಬ್, ನರಸಾಪುರ ರವರುಗಳ ನಾಮನಿರ್ದೇಶನವನ್ನು ರದ್ದುಪಡಿಸಿ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೋಲಾರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ಕೆಂಬೋಡಿ ನಾರಾಯಣಸ್ವಾಮಿ ಬಿನ್ ನಂಜಪ್ಪ ಕೆಂಬೋಡಿ ಗ್ರಾಮ ಮತ್ತು ಅಂಚೆ, ಕೋಲಾರ |
| 2 | ಶ್ರೀ ಡಿ. ರಾಜಪ್ಪ ಬಿನ್ ದೊಡ್ಡದೊಡ್ಡ ವೆಂಕಟಪ್ಪ ಮಾರ್ಚೇನಹಳ್ಳಿ ಗ್ರಾಮ, ಕಾಮದೇನಹಳ್ಳಿ ಅಂಚೆ, ಕೋಲಾರ ತಾ: |
| 3 | ಶ್ರೀಮತಿ ಕಮಲಮ್ಮ ಕೋಂ ಅಶ್ವಪ್ಪ ಮಡೇರಹಳ್ಳಿ ಗ್ರಾಮ, ಅರಾಭಿಕೊತ್ತನೂರು ಅಂಚೆ, ವಕ್ಕೇಲೇರಿ ಹೋಬಳಿ, ಕೋಲಾರ ತಾ: |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಕೆ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೭ |
|---|---|---|

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ಸಇ 157 ಎಂಆರ್‌ಇ 2009, ಬೆಂಗಳೂರು ದಿನಾಂಕ : 9ನೇ ಸೆಪ್ಟೆಂಬರ್, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸಕಲೇಶಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀಮತಿ ಯಶೋಧ ಕೋಂ ದೇವರಾಜು<br>ಮಳಲಿ, ಸಕಲೇಶಪುರ ತಾ : ಹಾಸನ ಜಿಲ್ಲೆ |
| 2 | ಶ್ರೀ ಹೆಚ್.ಎ. ಉದಯ ಬಿನ್ ಲೇ : ಆನಂದ್‌ಗೌಡ<br>ಚಿಕ್ಕಮನೆ, ಹೆತ್ತೂರು, ಸಕಲೇಶಪುರ ತಾ: ಹಾಸನ ಜಿಲ್ಲೆ |
| 3 | ಶ್ರೀ ಕೆ.ಬಿ. ಚಂದ್ರು ಬಿನ್ ಭೈರಯ್ಯ,<br>ಕಾರುಮಗ್ಗ ಗ್ರಾಮ, ಹಾನುಬಾಳು ಹೋ, ಸಕಲೇಶಪುರ ತಾ: ಹಾಸನ ಜಿಲ್ಲೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಕೆ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೮ |
|---|---|---|

**REVENUE SECRETARIAT**

**NOTIFICATION**

**No. RD 01 Bhudapu 2009, Bangalore, Dated : 5th September, 2009**

Whereas the Government of Karnataka has altered the limits of Bengre Village of Mangalore Taluk in notification No. RD 1 BHUDAPU 2000 Dated : 20-09-2008 published in the Karnataka Gazette Part IV-A (Extraordinary) No. 1107 dated 7th October 2008.

And whereas an extent of 0.44 and 3.52 acres of lands comprising in Sl. No. 116 and 117 respectively of Bolur 'B' Village of Mangalore Taluk is geographically merged in the newly formed Bengre

Village. of Mangalore Taluk. Therefore the said portion of the land has to be deleted from Bolur 'B' Village and has to be included in the newly formed Bengre Village. The newly formed alluvial land to the extent of 217.76 acre is also required to be included in the newly formed Bengre Village, by alter the limits from 355.72 of 577.44 acres.

Now, therefore, in exercise of the powers conferred by section 6 of Karnataka Land Revenue Act, 1964 (Karnataka Act 12 of 1964) read with rule 4 of the Karnataka Land Revenue Rules, 1966, notice of proposal to alter the limits of Bengre Village and Bolur-B Village as specified in the schedule below is hereby published for the information of all persons likely to be affected thereby, and notice is hereby given that the said proposals will be taken into consideration after one month from the date of publication of this notice in the official Gazette.

Any objection which may be received from any person with regard to the said proposals before the date specified above will be considered by the State Government. Objections, if any, may be addressed to the Deputy Commissioner, Dakshina Kannada District, Mangalore within one month from the date of publication of this notice in the official Gazette.

**Schedule**

| **Sl. No.** | **Survey No.** | **Extent** | **Remarks** |
|---|---|---|---|
| 1 | 1 to 46 | 355.72 | Already notified as per Government order No. RD 01 Bhudapu 2000 dated 20.9.2008. |
| 2 | 47 | 3.52 | Land proposed to be deleted from Bolur 'B' Village |
| 3 | 48 | 0.44 | Land to be included in Bengre village |
| 4 | 49 | 28.28 | Alluvial land newly surveyed and included to the Bengre Village |
| 5 | 50 | 26.90 | |
| 6 | 51 | 119.40 | |
| 7 | 52 | 43.18 | |
| | | **577.44 Acres** | |

**Boundary to Newly formed Bengre Village**

East : Gurupura River

West : Arabian Sea

North : Tannirbhavi Village Boundary

South : The Place where the rivers Nethravathi and Gurupura jointly joining the Arabian Sea

This proposed notification shall come into effect from such date as the State Government may specify in the notification proposed to be issued under section 5 of the Karnataka Land Revenue Act 1964.

By order and in the name of the Governor of Karnataka,
**B. V. CHOWKIMATH**
Under Secretary to Government
Revenue Department

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೮೯ |
|---|---|---|

**HEALTH AND FAMILY WELFARE SECRETARIAT**

**NOTIFICATION**

**No. HFW 20 PIM 2009, Bangalore, Dated : 9TH September, 2009**

Whereas the following rules, further to amend the Karnataka State Civil Services (Absorption of persons appointed as Rural Medical Practitioners/Subsidized Medical Practitioner/Aided Medical Practitioners in the Indian Systems of Medicine and Homeopathy Department) (Special) Rules, 1992, which the Government of Karnataka proposes to make in exercise of the powers conferred by sub-section (1) of section 3 read with section 8 of the Karnataka State Civil Services Act, 1978 (Karnataka Act 14 of

1990) was published as required by clause (a) of sub-section (2) of section 3 of the said Act, for the information of all persons likely to be affected thereby and notice was given that the said draft would be taken into consideration after fifteen days from the date of its publication in the Official Gazette.

And whereas the said Gazette was made available to the public on 10-07-2009.

And whereas, no objections and suggestions received by the Government.

Now, therefore, in exercise of the powers conferred by sub-section (1) of Section 3 r/w. Section 8 of the Karnataka State Civil Services Act, 1978 (Karnataka Act 14 of 1990), the Government of Karnataka hereby makes the following Rules namely :-

**RULES**

**1. Title and commencement,-** (1) These rules may be called the Karnataka State Civil Services (Absorption of persons appointed as Rural Medical Practitioners/Subsidized Medical Practitioner / Aided Medical Practitioners in the Indian Systems of Medicine and Homoeopathy Department) (Special) (Amendment) Rules 2009.

(2) They shall come into force from the date of their publication in the Official Gazette.

**2. Amendment of Schedule -** In the Karnataka State Civil Services (Absorption of persons appointed as Rural Medical Practitioners / Subsidized Medical Practitioner / Aided Medical Practitioners in the Indian Systems of Medicine and Homoeopathy Department) (Special) Rules, 1992, in the schedule, in the heading to column 4 for the words "Category of post and scale of pay in which absorbed" the words "Category of post and scale of pay in Physician Grade-III in which absorbed" shall be and shall always be deemed to have been substituted.

By order and in the name of the Governor of Karnataka,

**N. MAHALAKSHMAMMA**
Under Secretary to Government
Health & Family Welfare Department

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೦ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು
## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಬಿ.ಎಸ್.ಕೆ.ಗಿರೀಶ್, ವೈದ್ಯಾಧಿಕಾರಿ, ಸಂಚಾರಿ ಗಿರಿಜನ ಆರೋಗ್ಯ ಘಟಕ, ಹುಣಸೂರು, ಮೈಸೂರು ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ / ಮೈವಿ/ 30/ 03–04 ದಿನಾಂಕ: 05/09/2003
2) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ / ಮೈವಿ/ 30/ 03–04 ದಿನಾಂಕ: 19/04/2004
3) ಮುಖ್ಯ ಜಾಗೃತಾಧಿಕಾರಿ, ಜಾಗೃತ ಕೋಶ, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/ 05/2004–05 ದಿನಾಂಕ: 09/02/2005
4) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ / ಮೈವಿ/ 30/ 03–04 ದಿನಾಂಕ: 05/03/2005
5) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ / ಮೈವಿ/ 30/ 03–04 ದಿನಾಂಕ: 06/04/2009

**ಪ್ರಸ್ತಾವನೆ :**

ಡಾ: ಬಿ.ಎಸ್.ಕೆ.ಗಿರೀಶ್, ವೈದ್ಯಾಧಿಕಾರಿ, ಸಂಚಾರಿ ಗಿರಿಜನ ಆರೋಗ್ಯ ಘಟಕ, ಹುಣಸೂರು, ಮೈಸೂರು ಜಿಲ್ಲೆ ಇವರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 03/04/2003 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಹಾಜರಾಗದೆ

ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಸದರಿ ವೈದ್ಯರ ವಿರುದ್ಧ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಿ, ಅವರಿಂದ ರಕ್ಷಣಾ ಹೇಳಿಕೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಯವರು ನಿಗದಿತ ಅವಧಿಯಲ್ಲಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವಾದ್ದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ (2) ರಲ್ಲಿ ಓದಲಾದ ಆದೇಶ ದಿನಾಂಕ: 19/04/2004 ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಿ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಮೇಲೆ (3) ರ ಪತ್ರದಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಆಯುಕ್ತರಿಗೆ ದಿನಾಂಕ: 09/02/2005 ರಂದು ಸಲ್ಲಿಸಿದ್ದಾರೆ. ಸದರಿ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಗೆ ಇಲಾಖಾ ವಿಚಾರಣೆಗೆ ಹಾಜರಾಗಲು ವಿಚಾರಣಾಧಿಕಾರಿಗಳು ನೋಟೀಸನ್ನು ಜಾರಿಗೊಳಿಸಿದ್ದರೂ ಸಹ ಸದರಿ ಅಧಿಕಾರಿಗಳು ವಿಚಾರಣೆಗೆ ಹಾಜರಾಗದೆ ಇದ್ದುದ್ದರಿಂದ, ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಿ, ಸಾಕ್ಷಿದಾರರ ಸಾಕ್ಷ್ಯ, ಮಂಡನಾಧಿಕಾರಿಗಳ ವಾದ ಮಂಡನೆಯೊಂದಿಗೆ ವಿಚಾರಣೆಯನ್ನು ನಡೆಸಿ, ಇವರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪವು ನಿಸ್ಸಂಶಯವಾಗಿ ರುಜುವಾತಾಗಿದೆ ಎಂಬ ವರದಿಯನ್ನು ನೀಡಿರುತ್ತಾರೆ.

ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ಲಿಖಿತ ಹೇಳಿಯನ್ನು ಸಲ್ಲಿಸುವಂತೆ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಿದ್ದರೂ, ಸದರಿ ನೋಟೀಸ್ ಜಾರಿಯಾಗದೆ ಅಂಚೆ ಇಲಾಖೆಯಿಂದ ಹಿಂದಿರುಗಿದೆ.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸದರಿ ವೈದ್ಯಾಧಿಕಾರಿಗಳು ವಿಚಾರಣೆಗೆ ಹಾಜರಾಗದೆ, ಕರ್ತವ್ಯಕ್ಕೆ ಮರಳದೆ ಹಾಗೂ ವೈದ್ಯರ ಸ್ವ-ವಿಳಾಸಕ್ಕೆ ಕಳುಹಿಸಿದ್ದ ನೋಟೀಸ್ ಜಾರಿಯಾಗದೆ ವಿಳಾಸದಲ್ಲಿ ಅಧಿಕಾರಿಯು ಇಲ್ಲದೆ ಹಿಂದಿರುಗಿ ಬಂದಿದೆ ಎಂದು ಮುಂದಿನ ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೆಂದರೆ, ಆಪಾದಿತ ವೈದ್ಯರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಮಟ್ಟದ ಸರ್ಕಾರಿ ವೈದ್ಯರಾಗಿದ್ದು, ಕಾರಣ ನೀಡದೆ ಯಾವುದೇ ರಜೆಯನ್ನು ಸಲ್ಲಿಸದೆ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆಯದೆ ಅಥವಾ ರಜೆ ಮಂಜೂರಾತಿ ಇಲ್ಲದೆ ದಿನಾಂಕ: 03/04/2003 ರಿಂದ ಇದುವರೆವಿಗೂ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ಕಂಡು ಬರುತ್ತದೆ. ಇದರಿಂದಾಗಿ ಸಾರ್ವಜನಿಕ ಸೇವೆಗೆ ತೊಂದರೆಯಾಗಿರುತ್ತದೆ. ಇವರು ಖಾಯಂ ಪೂರ್ವ ಸೇವಾವಧಿಯನ್ನು ಪೂರೈಸದೆ ಇರುವುದರಿಂದ ಹಾಗೂ ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಆದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ-6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 129 ಎಂಎಸ್ಎ 2009, ಬೆಂಗಳೂರು, ದಿನಾಂಕ: 27/ 08/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ: ಬಿ.ಎಸ್.ಕೆ.ಗಿರೀಶ್, ವೈದ್ಯಾಧಿಕಾರಿ, ಸಂಚಾರಿ ಗಿರಿಜನ ಆರೋಗ್ಯ ಘಟಕ, ಹುಣಸೂರು, ಮೈಸೂರು ಜಿಲ್ಲೆ ಇವರು ಸರ್ಕಾರಿ ಸೇವೆಗೆ ದಿನಾಂಕ: 03/04/2003 ರಿಂದ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ-6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

| ಭಾಗ – I | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೧ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ಕೆ. ಎಸ್. ರೂಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಗುಡೇಮಾರನಹಳ್ಳಿ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ (1) ಬೆಂಗ್ರಾಂ/ 13/ 2003–04 ದಿನಾಂಕ: 13/12/2005
2) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಆದೇಶ ಸಂಖ್ಯೆ: ಡಿಪಿಜಿ (1) ಬೆಂಗ್ರಾಂ/ 13/ 2003–04 ದಿನಾಂಕ: 08/04/2008
3) ಕನ್ನಡ ಪ್ರಭ ದಿನ ಪತ್ರಿಕಾ ಪ್ರಕಟಣೆ ದಿನಾಂಕ: 24/07/2008
4) ಮುಖ್ಯ ಜಾಗ್ರತಾಧಿಕಾರಿಗಳು (ಜಾಗೃತಕೋಶ) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/ 02/ 2008–09 ದಿನಾಂಕ: 23/01/2009
5) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪ್ರಸ್ತಾವನೆ ಸಂಖ್ಯೆ: ಡಿಪಿಜಿ (1) ಬೆಂಗ್ರಾಂ/ 13/ 2003–04 ದಿನಾಂಕ: 21/03/2009
6) ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 124 ಎಂಎಸ್ಎ 2009 ದಿನಾಂಕ: 12/05/2009

**ಪ್ರಸ್ತಾವನೆ :**

ಡಾ:ಕೆ.ಎಸ್.ರೂಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಗುಡೇಮಾರನಹಳ್ಳಿ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ ಇವರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇಲ್ಲಿಂದ ವರ್ಗಾವಣೆಯ ಮೇರೆಗೆ ದಿನಾಂಕ: 11/05/2001 ರ ಪೂರ್ವಾಹ್ನ ಕರ್ತವ್ಯದಿಂದ ಬಿಡುಗಡೆ ಹೊಂದಿ ಸರ್ಕಾರಿ ಆದೇಶ ದಿನಾಂಕ: 20/02/2001 ರನ್ವಯ ಸಾರ್ವಜನಿಕ ಆಸ್ಪತ್ರೆ, ನೆಲಮಂಗಲ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿಗೆ ಕರ್ತವ್ಯಕ್ಕೆ ಹಾಜರಾಗಬೇಕಾಗಿದ್ದು, ಹಾಗೆ ಹಾಜರಾಗದೆ ತದ ನಂತರ ಇವರ ದಿನಾಂಕ: 20/01/2002 ರ ಮನವಿಯ ಮೇರೆಗೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ಅಧಿಸೂಚನೆ ದಿನಾಂಕ: 15/03/2005 ರಲ್ಲಿ ಸಾರ್ವಜನಿಕ ಆಸ್ಪತ್ರೆ, ಕನಕಪುರ ಇಲ್ಲಿಗೆ ಸ್ಥಳ ನಿಯುಕ್ತಿಗೊಳಿಸಿದ್ದರೂ ಸಹ ಅಲ್ಲಿಯೂ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ, ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿಗೊಳಿಸಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಆಯುಕ್ತರ ಷೋಕಾಸ್ ನೋಟೀಸಿಗೆ ಡಾ: ಕೆ.ಎಸ್. ರೂಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಗುಡೇಮಾರನಹಳ್ಳಿ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ ಇವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿಲ್ಲವಾದ ಕಾರಣ, ಈ ಪ್ರಕರಣವನ್ನು ಇಲಾಖಾ ವಿಚಾರಣೆಗೆ ಗುರಿಪಡಿಸಲು ನಿರ್ಧರಿಸಿ, ಮೇಲೆ (2)ರ ಓದಲಾದ ಆದೇಶದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಈ ಪ್ರಕರಣದಲ್ಲಿ ವಿಚಾರಣೆ ನಡೆಸಲು ಮುಖ್ಯ ಜಾಗ್ರತಾಧಿಕಾರಿಗಳು (ಜಾಗೃತ ಕೋಶ), ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮತ್ತು ಆಡಳಿತಾಧಿಕಾರಿಗಳು (ಸಾಮಾನ್ಯ) ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿ ವಿಚಾರಣಾ ವರದಿಯನ್ನು ಸಲ್ಲಿಸಲು ನಿರ್ದೇಶಿಸಲಾಗಿತ್ತು. ತದ ನಂತರ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಪತ್ರಿಕಾ ಪ್ರಕಟಣೆ ನೀಡಿ ಮತ್ತೊಮ್ಮೆ ಅವಕಾಶ ನೀಡಲಾಗಿತ್ತು.

ಮುಖ್ಯ ಜಾಗೃತಾಧಿಕಾರಿಗಳು (ಜಾಗೃತ ಕೋಶ), ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ನಿಯಮಾನುಸಾರ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರಿಗೆ ಸಲ್ಲಿಸಿರುತ್ತಾರೆ. ಸದರಿ ವಿಚಾರಣಾ ವರದಿಯಲ್ಲಿ ಆಪಾದಿತ ವೈದ್ಯಾಧಿಕಾರಿಯು ದಿನಾಂಕ: 11/05/2001 ರಿಂದ ಈವರೆವಿಗೂ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ 120 ದಿನಗಳಿಗೂ ಹೆಚ್ಚಿನ ಅವಧಿ ಅಂದರೆ 7 ವರ್ಷಗಳಿಗೂ ಮೇಲ್ಪಟ್ಟು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರು ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿಗಳು 1966ರ ನಿಯಮ 3(1) (i)(ii)(iii) ನ್ನು

ಉಲ್ಲಂಘಿಸಿರುತ್ತಾರೆ ಇದರಿಂದ ಇವರು ಸರ್ಕಾರಿ ಸೇವೆಯಲ್ಲಿ ಆಸಕ್ತಿ ತೋರದೆ ಇರುವುದು ವ್ಯಕ್ತವಾಗುವುದರಿಂದ ಆಪಾದಿತರ ಮೇಲಿನ ಆರೋಪವು ವಿಚಾರಣೆಯಿಂದ ಸ್ಪಷ್ಟವಾಗಿ ಸಾಬೀತಾಗಿದೆ ಎಂದು ನಿರ್ಣಯ ನೀಡಿದ್ದಾರೆ.

ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವರದಿಯನ್ನು ಒಪ್ಪಿ ಆರೋಪಿತ ಅಧಿಕಾರಿಗೆ ಕಠಿಣ ದಂಡನೆ ವಿಧಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆ, ಸಂಬಂಧಿಸಿದ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಅನಧಿಕೃತ ಗೈರುಹಾಜರಿಯ ವಿಚಾರಣಾ ವರದಿಯಿಂದ ಸಾಬೀತಾಗಿರುವುದರಿಂದ ವಿಚಾರಣಾ ವರದಿಯನ್ನು ಆಪಾದಿತ ವೈದ್ಯರಿಗೆ ಮೇಲೆ (6) ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಜಾರಿ ಮಾಡಲಾಗಿದ್ದು, ಸದರಿ ತಿಳುವಳಿಕೆ ಪತ್ರ ಆರೋಪಿತ ಅಧಿಕಾರಿಗೆ ಜಾರಿಯಾಗದೆ ಹಿಂದಿರುಗಿದೆ.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿ, ಸಂಬಂಧಿಸಿದ ದಾಖಲೆಗಳನ್ನು ಹಾಗು ಸಾಕ್ಷ್ಯಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಡಾ: ಕೆ.ಎಸ್. ರೂಪ ರವರು ದಿನಾಂಕ: 11/05/2001 ರಿಂದ ಅನಧಿಕೃತ ಗೈರುಹಾಜರಿ ಆಗಿದ್ದು, ಸದರಿಯವರಿಗೆ ವಿಚಾರಣೆಗೆ ಹಾಜರಾಗುವಂತೆ ನೋಟೀಸ್ ಜಾರಿ ಮಾಡಲಾಗಿದ್ದು, ತದ ನಂತರ ಈ ಸಂಬಂಧ ಪತ್ರಿಕಾ ಪ್ರಕಟಣೆ ನೀಡಿದ್ದರೂ ಸಹ ಅದಕ್ಕೂ ಸ್ಪಂದಿಸದೆ ಇಲಾಖಾ ವಿಚಾರಣೆಗೂ ಸಹ ಹಾಜರಾಗದೆ ಸರ್ಕಾರಿ ಕರ್ತವ್ಯಕ್ಕೆ ಹಿಂದಿರುಗದೆ ಕರ್ತವ್ಯಲೋಪವೆಸಗಿರುವುದು ಇಲಾಖಾ ವಿಚಾರಣೆಯಿಂದ ದೃಢಪಡುತ್ತದೆ. ಸದರಿ ಅಧಿಕಾರಿಯು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಮಟ್ಟದ ಸರ್ಕಾರಿ ವೈದ್ಯರಾಗಿದ್ದು, ಕಾರಣ ನೀಡದೆ ಯಾವುದೇ ರಜೆಯನ್ನು ಸಲ್ಲಿಸದೆ ಸಕ್ರಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ಅಥವಾ ರಜೆ ಮಂಜುರಾತಿ ಇಲ್ಲದೆ ಸರ್ಕಾರಿ ಸೇವೆಗೆ ದೀರ್ಘಾವಧಿ ಗೈರುಹಾಜರಾಗಿರುವುದರಿಂದ ಸಾರ್ವಜನಿಕ ಸೇವೆಗೆ ತೊಂದರೆಯಾಗಿರುವುದರಿಂದ ಹಾಗೂ ವಿಚಾರಣಾಧಿಕಾರಿಯವರು ನಡೆಸಿರುವ ವಿಚಾರಣಾ ವರದಿಯಲ್ಲಿ ಇವರು ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಿ ಆರೋಪ ಸಾಬೀತಾಗಿರುವುದರಿಂದ, ಇವರು ನೋಟೀಸಿಗೂ ಉತ್ತರಿಸದೆ ಸರ್ಕಾರದ ಪತ್ರಗಳಿಗೆ ಸ್ಪಂದಿಸದೆ ಹಾಗು ಸೇವೆಗೆ ಹಾಜರಾಗದೆ ಇರುವುದರಿಂದ ಇವರನ್ನು ಸಂಪರ್ಕಿಸುವುದು ಅಸಾಧ್ಯವಾಗಿರುವುದರಿಂದ ಡಾ: ಕೆ.ಎಸ್.ರೂಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ, ಗುಡೇಮಾರನಹಳ್ಳಿ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ ಇವರು ದಿನಾಂಕ: 30/01/2001 ರಿಂದ ಇಲ್ಲಿಯವರೆವಿಗೂ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ದೃಢಪಟ್ಟಿರವುದರಿಂದ ಇವರಿಗೆ ಕರ್ನಾಟಕ ನಾಗರೀಕ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(VIII) ಹಾಗೂ ನಿಯಮ-14(ii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಸರ್ಕಾರಿ ಸೇವೆಯಿಂದ ವಜಾಗೊಳಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 124 ಎಂಎಸ್ಎ 2009, ಬೆಂಗಳೂರು, ದಿನಾಂಕ: 05/ 09/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-8(VIII) ಹಾಗೂ ನಿಯಮ-14(ii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ: ಕೆ.ಎಸ್. ರೂಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾ. ಆ. ಕೇಂದ್ರ, ಗುಡೇಮಾರನಹಳ್ಳಿ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ



| ಭಾಗ – I | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೨ |
|---|---|---|



**ಕರ್ನಾಟಕ ಸರ್ಕಾರದ ನಡವಳಿಗಳು**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ಸಂಜಯ್ ಮಿಠಾರೆ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಸಂತಪೂರ, ಬಿಜಾಪುರ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ / (2) / 02/ 03–04 ದಿನಾಂಕ: 30/07/2004
2) ಡಾ:ಸಂಜಯ್ ಮಿಠಾರೆ, ವೈದ್ಯಾಧಿಕಾರಿಗಳು, ಇವರ ರಕ್ಷಣಾ ಹೇಳಿಕೆ ದಿನಾಂಕ: 08/10/2004
3) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಆದೇಶ ಸಂಖ್ಯೆ: ಡಿಪಿಜಿ / (2) / 02/ 03–04 ದಿನಾಂಕ: 04/11/2004
4) ಮುಖ್ಯ ಜಾಗೃತಾಧಿಕಾರಿಗಳು (ಜಾಕೋ) ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ವಿಚಾರಣಾ ವರದಿ ಸಂಖ್ಯೆ: ಮುಜಾಅ/ಜಾಕೋ/ 47/ 2004–05 ದಿನಾಂಕ: 28/03/2006
5) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ / (2) / 02/ 03–04 ದಿನಾಂಕ: 23/06/2006
6) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ / (2) / 02/ 03–04 ದಿನಾಂಕ: 05/11/2008

**ಪ್ರಸ್ತಾವನೆ :**

ಡಾ: ಸಂಜಯ್ ಮಿಠಾರೆ, ವೈದ್ಯಾಧಿಕಾರಿಗಳು, ಪ್ರಾ.ಆ.ಕೇಂದ್ರ, ಸಂತಪೂರ, ಬಿಜಾಪುರ ಜಿಲ್ಲೆ ಇವರು ನಿಯೋಜನೆ ಮೇಲೆ ಪ್ರಾ.ಆ.ಘಟಕ, ವಾಗಾಂವ್ (ಡಿ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 16/08/1997 ರಿಂದ 31/08/1997, 11/09/1997 ರಿಂದ 16/09/1997, 02/12/1997 ರಿಂದ 23/12/1997, ಹಾಗೂ ದಿನಾಂಕ: 21/01/1998 ರಿಂದ 10/02/1998, ದಿನಾಂಕ: 02/04/1998 ರಿಂದ 17/904/1998 ತದ ನಂತರ ದಿನಾಂಕ: 28/04/1998 ರಿಂದ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಸದರಿ ವೈದ್ಯರಿಗೆ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1) ರಲ್ಲಿ ಓದಲಾದ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಅವರಿಂದ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಸದರಿ ನೋಟೀಸಿಗೆ ಸಂಬಂಧಿಸಿದಂತೆ ಆರೋಪಿತ ಅಧಿಕಾರಿಯು ತಮ್ಮ ರಕ್ಷಣಾ ಹೇಳಿಕೆಯನ್ನು ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಸಲ್ಲಿಸಿರುವರು.

ಮೇಲೆ (3) ರ ಓದಲಾದ ಆದೇಶ ದಿನಾಂಕ: 04/11/2004 ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಸದರಿ ರಕ್ಷಣಾ ಹೇಳಿಕೆಯಲ್ಲಿ ಒಪ್ಪುವಂತಹ ಅಂಶಗಳು ಯಾವುದು ಇಲ್ಲದಿದ್ದ ಕಾರಣ ಈ ಸಂಬಂಧ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ನೀಡುವಂತೆ ನಿರ್ದೇಶಿಸಿದ್ದರು.

ಮೇಲೆ (4) ರಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾಕೋ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಆಯುಕ್ತರಿಗೆ ದಿನಾಂಕ: 28/03/2006 ರಂದು ಸಲ್ಲಿಸಿದ್ದಾರೆ. ಸದರಿ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಗೆ ಇಲಾಖಾ ವಿಚಾರಣೆಗೆ ಹಾಜರಾಗಲು ನೋಟೀಸನ್ನು ಜಾರಿಗೊಳಿಸಿದ್ದರೂ ಸಹ ಸದರಿ ಅಧಿಕಾರಿಯು ವಿಚಾರಣೆಗೆ ಹಾಜರಾಗದೆ ಇದ್ದುದ್ದರಿಂದ ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಿ, ಸಾಕ್ಷಿದಾರರ ಸಾಕ್ಷ್ಯ ಮಂಡನಾಧಿಕಾರಿಗಳ ವಾದ ಮಂಡನೆಯೊಂದಿಗೆ ಇವರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪವು ನಿಸ್ಸಂಶಯವಾಗಿ ರುಜುವಾತಾಗಿದೆ ಎಂಬ ವರದಿಯನ್ನು ನೀಡಿರುತ್ತಾರೆ.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸದರಿ ನಿರ್ಣಯವನ್ನು ಒಪ್ಪಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ 2ನೇ ಕಾರಣ ಕೇಳುವ ನೋಟೀಸ್ ಅನ್ನು ವಿಚಾರಣಾ ವರದಿಯೊಂದಿಗೆ ಆರೋಪಿತ ಅಧಿಕಾರಿಗೆ ಜಾರಿಗೊಳಿಸಿದ್ದು, ಸದರಿ ನೋಟೀಸ್ ಸ್ವೀಕೃತವಾಗದೆ ಅಂಚೆ ಇಲಾಖೆಯಿಂದ ಹಿಂದಿರುಗಿದೆ.

ಮೇಲೆ (6) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸದರಿ ವೈದ್ಯಾಧಿಕಾರಿಯು ಸರ್ಕಾರದ ಪತ್ರಗಳಿಗೆ ಯಾವುದೇ ಪ್ರತ್ಯುತ್ತರ ನೀಡದೆ ಇರುವುದರಿಂದ ಹಾಗೂ ವೈದ್ಯರ ಸ್ವ–ವಿಳಾಸಕ್ಕೆ ಕಳುಹಿಸಿರುವ ಪತ್ರಗಳು ಜಾರಿಯಾಗದೆ ಎಲ್ಲಾ ಪತ್ರಗಳು ವಿಳಾಸದಲ್ಲಿ ಇಲ್ಲವೆಂದು ಹಿಂದಿರುಗಿ ಬಂದಿರುವುದರಿಂದ ಹಾಗು ಆರೋಪಿತ ವೈದ್ಯರು ಇಲಾಖಾ ವಿಚಾರಣೆಗೂ ಸಹ ಸ್ಪಂದಿಸದೆ ಇರುವ ಕಾರಣ ಸದರಿ ವೈದ್ಯರ ಅನಧಿಕೃತ ಗೈರುಹಾಜರಿ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ದಿನಾಂಕ: 05/11/2008 ರಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೆಂದರೆ, ಇವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಮಟ್ಟದ ಸರ್ಕಾರಿ ವೈದ್ಯರಾಗಿದ್ದು, ಕಾರಣ ನೀಡದೆ ಯಾವುದೇ ರಜೆಯನ್ನು ಸಲ್ಲಿಸದೆ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ಅಥವಾ ರಜೆ ಮಂಜೂರಾತಿ ಇಲ್ಲದೆ ದಿನಾಂಕ: 28/04/1998 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದಲ್ಲದೆ ಕರ್ತವ್ಯಕ್ಕೆ ತಮಗೆ ಇಷ್ಟ ಬಂದಾಗ ಬರುವುದು, ಹೋಗುವುದು ಕಂಡು ಬಂದಿದೆ. ಇದರಿಂದಾಗಿ ಸಾರ್ವಜನಿಕ ಸೇವೆಗೆ ತೊಂದರೆಯಾಗಿರುತ್ತದೆ. ಇವರು ಖಾಯಂ ಪೂರ್ವ ಸೇವಾವಧಿಯನ್ನು ಪೂರೈಸದೆ ಇರುವುದರಿಂದ ಹಾಗು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಆದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 452 ಎಂಎಸ್‌ಎ 2008, ಬೆಂಗಳೂರು, ದಿನಾಂಕ : 27/ 08/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ:ಸಂಜಯ್ ಮಿಠಾರೆ, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಸಂತಪೂರ, ಬಿಜಾಪುರ ಜಿಲ್ಲೆ ಇವರು ಸರ್ಕಾರಿ ಸೇವೆಗೆ ದಿನಾಂಕ: 28/04/1998 ರಿಂದ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೩ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**
**ಒಳಾಡಳಿತ ಸಚಿವಾಲಯ**

**ವಿಷಯ :** ಕಾರಾಗೃಹಗಳ ಬಂದಿಗಳ ಕೂಲಿ ಹಣ ಹೆಚ್ಚಿಸುವ ಬಗ್ಗೆ ಕೂಲಿ ನಿಗದಿ ಮಂಡಳಿಯನ್ನು ಪುನರ್ ರಚಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 37 ಪಿಆರ್‌ಎ 96 ದಿನಾಂಕ:22–1–1999.
2. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 37 ಪಿಆರ್‌ಎ 96 ದಿನಾಂಕ:10–8–1999.
3. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 37 ಪಿಆರ್‌ಎ 96 ದಿನಾಂಕ:10–9–2004.
4. ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ:ಎಡಿಎಂ4: ಸಿಆರ್–107/2008–09, ದಿನಾಂಕ 19.6.2008, 5–12–2008 ಮತ್ತು 22–4–2009 ಮತ್ತು 5–6–2009

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ, ಕಾರಾಗೃಹಗಳಲ್ಲಿನ ಬಂದಿಗಳಿಗೆ ಈ ಕೆಳಕಂಡಂತೆ ದಿನಗೂಲಿ ದರವನ್ನು ಮಧ್ಯಂತರವಾಗಿ ನಿಗದಿಪಡಿಸಲಾಗಿತ್ತು:–

| ಕ್ರ. ಸಂ. | ಬಂದಿಗಳ ವರ್ಗ | ಈ ಹಿಂದೆ ಇದ್ದ ದರ | ಹೆಚ್ಚಿಸಿದ ದರ | ಊಟ, ಬಟ್ಟೆ ವೆಚ್ಚ | ನಗದು ಪಾವತಿ |
|---|---|---|---|---|---|
| 1 | ತರಬೇತಿ ಕೆಲಸಗಾರ ಬಂದಿ (ಹಿಂದೆ ಅನ್ ಸ್ಕಿಲ್ಡ್) | 6.00 | 35.00 | 25.00 | 10.00 |
| 2 | ಕುಶಲ ಬಂದಿ (ಹಿಂದೆ ಅರೆ ಕುಶಲ ಬಂದಿ) | 8.00 | 40.00 | 25.00 | 15.00 |

| | | | | | |
|---|---|---|---|---|---|
| 3 | ಹೆಚ್ಚಿನ ಕುಶಲ ಬಂದಿ (ಹಿಂದೆ ಕುಶಲ ಬಂದಿ) | 10.00 | 45.00 | 25.00 | 20.00 |

ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ, ಕಾರಾಗೃಹಗಳಲ್ಲಿನ ಬಂದಿಗಳಿಗೆ ಸಮಾನ ಕೂಲಿಯನ್ನು ನಿಗದಿಮಾಡುವ ಬಗ್ಗೆ ಸರ್ವೋಚ್ಚ ನ್ಯಾಯಾಲಯವು ರಾಜ್ಯ ಸರ್ಕಾರಕ್ಕೆ ನೀಡಿದ ನಿರ್ದೇಶನವನ್ನು ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ಬಂದಿಗಳಿಗೆ ಅವರು ಮಾಡುವ ಕೆಲಸಕ್ಕೆ ಸೂಕ್ತವಾದ ಕೂಲಿಯನ್ನು ನಿಗದಿ ಮಾಡಲು ಈ ಕೆಳಕಂಡಂತೆ ಕೂಲಿ ನಿಗದಿ ಮಂಡಳಿ (ವೇಜ್ ಫಿಕ್ಸೇಷನ್ ಬಾಡಿ) ಯನ್ನು ರಚಿಸಲಾಗಿತ್ತು:-

1. ಕಾರ್ಮಿಕ ಆಯುಕ್ತರು : ಅಧ್ಯಕ್ಷರು
2. ಆರ್ಥಿಕ ಇಲಾಖೆಯ ಉಪ ಕಾರ್ಯದರ್ಶಿ : ಸದಸ್ಯರು
3. ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಉಪ ಕಾರ್ಯದರ್ಶಿ : ಸದಸ್ಯರು
4. ಕಾರಾಗೃಹಗಳ ಉಪ ಮಹಾನಿರೀಕ್ಷಕರು : ಸದಸ್ಯ ಕಾರ್ಯದರ್ಶಿ

ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ, ಕಾರಾಗೃಹದಲ್ಲಿರುವ ಬಂದಿಗಳಿಗೆ ಸಮಾನ ಕೆಲಸಕ್ಕೆ ಸಮಾನ ಕೂಲಿದರ ನಿಗದಿಪಡಿಸುವ ಬಗ್ಗೆ ದಿನಾಂಕ:22-1-99 ರ ಸರ್ಕಾರಿ ಆದೇಶ (ಸಂಖ್ಯೆ:ಹೆಚ್‌ಡಿ 37 ಪಿಆರ್‌ಎ 96) ರಲ್ಲಿ ನಿಗದಿಪಡಿಸಲಾದ ದಿನಗೂಲಿ ದರಗಳನ್ನೇ ಖಾಯಂಗೊಳಿಸಿ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ಪತ್ರಗಳಲ್ಲಿ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಈ ಹಿಂದೆ ನಿಗದಿಪಡಿಸಿದ ಕೂಲಿಯನ್ನು 3 ವರ್ಷಗಳ ನಂತರ ಪರಿಷ್ಕರಿಸಬೇಕಾಗಿದ್ದು, ಈ ಬಗ್ಗೆ ಅಭ್ಯಸಿಸಿ ವರದಿ/ಶಿಫಾರಸ್ಸು ನೀಡಲು ಅನುಕೂಲವಾಗುವಂತೆ ಈ ಕೆಳಕಂಡಂತೆ ಕೂಲಿ ಮಂಡಳಿಯನ್ನು ಪುನರ್ ರಚಿಸಬೇಕೆಂದು ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ:-

1. ಕಾರ್ಮಿಕ ಆಯುಕ್ತರು : ಅಧ್ಯಕ್ಷರು
2. ಉಪ ಕಾರ್ಯದರ್ಶಿಗಳು, ಒಳಾಡಳಿತ ಇಲಾಖೆ : ಸದಸ್ಯರು
3. ಉಪ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ : ಸದಸ್ಯರು
4. ಉಪ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ : ಸದಸ್ಯರು
5. ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು : ಸದಸ್ಯರು
6. ಕಾರಾಗೃಹಗಳ ಉಪ ಮಹಾನಿರೀಕ್ಷಕರು : ಸದಸ್ಯ ಕಾರ್ಯದರ್ಶಿಗಳು

ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 298 ಪಿಆರ್‌ಎ 2008, ಬೆಂಗಳೂರು, ದಿನಾಂಕ : 05.09.2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಾರಾಗೃಹಗಳಲ್ಲಿನ ಬಂದಿಗಳು ಮಾಡುವ ಕೆಲಸಕ್ಕೆ "ಸಮಾನ ಕೆಲಸಕ್ಕೆ ಸಮಾನ ಕೂಲಿಯಂತೆ" ಈಗಿರುವ ಕೂಲಿಯನ್ನು ಪರಿಷ್ಕರಿಸಲು ಈ ಬಗ್ಗೆ ಅಭ್ಯಸಿಸಿ ವರದಿ/ಶಿಫಾರಸ್ಸು ನೀಡಲು ಅನುವಾಗುವಂತೆ ಸರ್ಕಾರವು, ಈ ಕೆಳಕಂಡಂತೆ ಕೂಲಿ ನಿಗದಿ ಮಂಡಳಿ (ವೇಜ್ ಫಿಕ್ಸೇಷನ್ ಬಾಡಿ) ಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿದೆ.

1. ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಬೆಂಗಳೂರು. : ಅಧ್ಯಕ್ಷರು
2. ಸರ್ಕಾರದ ಜಂಟಿ ಕಾರ್ಯದರ್ಶಿಗಳು, (ಕಾನೂನು ಮತ್ತು ಸುವ್ಯವಸ್ಥೆ), ಒಳಾಡಳಿತ ಇಲಾಖೆ, ವಿಧಾನಸೌಧ, ಬೆಂಗಳೂರು. : ಸದಸ್ಯರು
3. ವಿಶೇಷಾಧಿಕಾರಿಗಳು (ವಿಶ್ರಾಂತಿ ವೇತನ) ಆರ್ಥಿಕ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು. : ಸದಸ್ಯರು
4. ಸರ್ಕಾರದ ಉಪ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ ವಿಕಾಸಸೌಧ, ಬೆಂಗಳೂರು. : ಸದಸ್ಯರು
5. ಕಾರಾಗೃಹಗಳ ಉಪ ಮಹಾನಿರೀಕ್ಷಕರು, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರ ಕಚೇರಿ, ಶೇಷಾದ್ರಿ ರಸ್ತೆ, ಬೆಂಗಳೂರು. : ಸದಸ್ಯರು
6. ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು. : ಸದಸ್ಯ ಕಾರ್ಯದರ್ಶಿ

ಈ ಮಂಡಳಿಯು ಕನಿಷ್ಠ ನಿಗದಿ ಕಾಯ್ದೆ ಮುಂತಾದವುಗಳನ್ನು ಹಾಗೂ ಬಂದಿಗಳು ಮಾಡುವ ಕೆಲಸಕ್ಕೆ ಸೂಕ್ತವಾದ ಕೂಲಿ ದರಗಳನ್ನು ಪರಿಶೀಲಿಸುವುದರೊಂದಿಗೆ, ಈ ವಿಚಾರದಲ್ಲಿ ಗೌ:ನ್ಯಾಯಾಲಯಗಳು ಹಾಗೂ ರಾಷ್ಟ್ರೀಯ/ರಾಜ್ಯ ಮಾನವ ಹಕ್ಕುಗಳ ಆಯೋಗವು ನೀಡಿದ ನಿರ್ದೇಶನಗಳನ್ನು ಗಣನೆಗೆ ತೆಗೆದುಕೊಂಡು ಸರ್ಕಾರಕ್ಕೆ ಸೂಕ್ತ ಶಿಫಾರಸ್ಸನ್ನು ಕಳುಹಿಸಲು ಆದೇಶಿಸಿದೆ.

ಈ ಮಂಡಳಿಯು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಬೇಕಾಗಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪದ್ಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೫ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 1098 ವೆಚ್ಚ –12/ 09, ಬೆಂಗಳೂರು, ದಿನಾಂಕ : 7ನೇ ಸೆಪ್ಟೆಂಬರ್, 2009**

ರಾಜ್ಯದ ಉತ್ತರ ಒಳನಾಡಿನ ಜಿಲ್ಲೆಗಳಾದ ರಾಯಚೂರು, ಗುಲ್ಬರ್ಗ, ಬೀದರ್, ಬಿಜಾಪುರ, ಕೊಪ್ಪಳ, ಬಾಗಲಕೋಟೆ ಮತ್ತು ಗದಗ್ ಜಿಲ್ಲೆಗಳಲ್ಲಿನ ಸೂಕ್ತ ಭಾಗಗಳಲ್ಲಿ "ಮೋಡ ಬಿತ್ತನೆ' ಕಾರ್ಯಕ್ರಮವನ್ನು ಅಂದಾಜು ರೂ. 7.00 ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ನೇರವಾಗಿ "ಮೆ : ಅಗ್ನಿ ಏವಿಯೇಶನ್ ಕನ್‌ಸಲ್ಟಂಟ್ಸ್ ಸಂಸ್ಥೆ' ಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ – 1999 ರ ಕಲಂ 4 (ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಕಂದಾಯ ಇಲಾಖೆಗೆ ಪಾರದರ್ಶಕ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೬ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 1004 ವೆಚ್ಚ –12/ 09, ಬೆಂಗಳೂರು, ದಿನಾಂಕ : 7ನೇ ಸೆಪ್ಟೆಂಬರ್, 2009**

"Creation of Geo-spatial data-base of mining lease areas pertaining to Bellary District" ಯೋಜನೆಯನ್ನು ರೂ. 62.27 ಲಕ್ಷಗಳ ವೆಚ್ಚದಲ್ಲಿ ನಿರ್ವಹಿಸಲು, ನೇರವಾಗಿ, ರಾಜ್ಯದಲ್ಲಿ Remote sensing ಹಾಗೂ GIS applications ಹೊಂದಿರುವ ಏಕೈಕ ಸಂಸ್ಥೆಯಾದ "Karnataka State Remote Sensing Application Centre" (KSRSAC) ಸಂಸ್ಥೆಗೆ ವಹಿಸಲು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ – 1999 ರ ಕಲಂ 4 (ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ (Dept. of IT, BT, S&T) ಪಾರದರ್ಶಕ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೭ |
|---|---|---|

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ಅಧಿಸೂಚನೆ**

**ಸಂ. ಅಪಜೀ 96 ಇಪಿಸಿ 2009 (ಭಾಗ) ಬೆಂಗಳೂರು, ದಿನಾಂಕ : 31ನೇ ಆಗಸ್ಟ್, 2009**

ಶ್ರೀ ಎ. ಎಸ್. ಸದಾಶಿವಯ್ಯ, ಭಾಅಸೇ, (ನಿವೃತ್ತ), ನಂ. 63, 1ನೇ ಅಡ್ಡರಸ್ತೆ, 1ನೇ ಮುಖ್ಯರಸ್ತೆ, ಹೆಚ್.ಎ.ಎಲ್. 3ನೇ ಹಂತ, ಇಂದಿರಾನಗರ, ಬೆಂಗಳೂರು – 560 075. ಇವರನ್ನು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧ್ಯಕ್ಷರಾಗಿ ಜಲ (ಮಾಲಿನ್ಯ ನಿವಾರಣೆ ಮತ್ತು ನಿಯಂತ್ರಣ) ಕಾಯ್ದೆ, 1974 ರ ಅನುಚ್ಛೇದ–4 (2) (a) ರನ್ವಯ ದಿನಾಂಕ : 04–09–2009ರ ಅಪರಾಹ್ನದಿಂದ ಜಾರಿಗೆ ಬರುವಂತೆ ಮೂರು ವರ್ಷಗಳ ಅವಧಿಗೆ ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಅಧ್ಯಕ್ಷರಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಈ ನೇಮಕಾತಿಗೆ ಸಂಬಂಧಿಸಿದಂತೆ ಷರತ್ತು ಮತ್ತು ನಿಬಂಧನೆಗಳ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಜಗನ್ನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೮ |
|---|---|---|

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂ. ಒಇ 60 ಪೊಸಇ 2009, ಬೆಂಗಳೂರು, ದಿನಾಂಕ : 1ನೇ ಸೆಪ್ಟೆಂಬರ್, 2009**

ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 ದಿನಾಂಕ : 24–08–2009 ರಲ್ಲಿಯ ಆದೇಶ ಭಾಗದ ಕಂಡಿಕೆ–2 ಮಂಡಳಿಯ ಪ್ರಕಾರ್ಯಗಳು ಇದರಡಿಯಲ್ಲಿ ಎ) ರ ಮೊದಲನೇ ಸಾಲಿನಲ್ಲಿ ""ಇದು, ಉಪ ಪೊಲೀಸ್ ಆಯುಕ್ತರ ದರ್ಜೆಯ ಅಧಿಕಾರಿಗಳು'' ಎಂಬುದರ ಬದಲು ""ಇದು, ಉಪ ಪೊಲೀಸ್ ಅಧೀಕ್ಷಕರ ದರ್ಜೆಯ ಅಧಿಕಾರಿಗಳು'' ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ವಿಶೇಷ ಪತ್ರಿಕೆ

| ಭಾಗ – **IV-A** | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೯ |
|---|---|---|

**ಸಹಕಾರ ಸಚಿವಾಲಯ**

**ಅಧಿಸೂಚನೆ**

**ಸಂ. ಸಇ 202 ಎಂಆರ್‌ಇ 2009, ಬೆಂಗಳೂರು, ದಿನಾಂಕ : 1ನೇ ಸೆಪ್ಟೆಂಬರ್, 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1) (ix) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಪಿರಿಯಾಪಟ್ಟಣ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

| | |
|---|---|
| 1 | ಶ್ರೀ ಪಿ.ಟಿ. ವೇಣುಗೋಪಾಲ್ ಬಿನ್ ತಿಮ್ಮಯ್ಯ ಪಿರಿಯಾಪಟ್ಟಣ ಟೌನ್, ಒಳಕೋಟೆ |
| 2 | ಶ್ರೀ ಬೆಮ್ಮತ್ತಿ ಕೃಷ್ಣ ಬಿನ್ ಕೆಂಪರಾಜ ಆನೆಚೌಕು ರಸ್ತೆ, ಪಿರಿಯಾಪಟ್ಟಣ |
| 3 | ಶ್ರೀಮತಿ ಸುಜಾತ ಕೋಂ ಪುಟ್ಟಸ್ವಾಮಿ ಪಿರಿಯಾಪಟ್ಟಣ ಟೌನ್ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಹಕಾರ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೮೯೪ |
|---|---|---|

**HOME SECRETARIAT**

**ORDER**

**No. HD 231 SST 2009, Bangalore, Dated : 9TH September, 2009**

WHEREAS the Government of Karnataka having regard to the circumstances prevailing in the State is satisfied that it is necessary that all Commissioners of Police and all the District Magistrates should be empowered to exercise the powers under sub-section (2) of section 3 of the Karnataka prevention of Dangerous Activities of Boot-leggers, Drug-Offenders, Gamblers, Goondas, Immoral Traffic Offenders and Slum-Grabbers Act, 1985 (Karnataka Act No. 12 of 1985)

Now, therefore in exercise of the powers conferred by Sub-Section (2) of Section 3 of the Karnataka Prevention of Dangerous Activities of Boot leggers, Drug-Offenders, Gamblers, Goondas, Immoral Traffic Offenders and Slum-Grabbers Act, 1985 the Government of Karnataka hereby direct that all the Commissioners of Police and all the District Magistrate in the State shall exercise the powers conferred by sub-section (1) of section 3 within the limits of their jurisdiction for a period of three months from 11.09.2009 to 10.12.2009

By order and in the name of the Governor of Karnataka
**K.C. SIDDAPPA**
Under Secretary to Government
Home Department
(Law and Order)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೯೦೦ |
|---|---|---|

**FINANCE SECRETARIAT**

**NOTIFICATION**

**No. FD 220 CSL 2009, Bangalore, Dated: 24th September, 2009**

The draft of the following rules further to amend the Karnataka Tax on Professions, Trades, Callings and Employments Rules, 1976 which the Government of Karnataka proposes to make in exercise of the powers conferred by section 33 of the Karnataka Tax on Professions, Trades, Callings and Employments Act, 1976 (Karnataka Act 35 of 1976) is hereby published as required by sub-section (1) for the information of all the persons likely to be affected thereby and notice is hereby given that the said draft will be taken into consideration after thirty days from the date of its publication in the Official Gazette.

Any objection or suggestion which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Finance Department, Vidhana Soudha, Bangalore-560 001.

**DRAFT RULES**

**1. Title and commencement.-** (1) These rules may be called the Karnataka Tax on Professions, Trades, Callings and Employments (Amendment) Rules, 2009.

(2) They shall come into force from the date of their publication in the Official Gazette.

**2. Substitution of Form 4.-** In the Karnataka Tax on Professions, Trades, Callings and Employments Rules, 1976 (hereinafter referred to as the said rules), for Form 4, the following shall be substituted, namely:-

**"Form 4**

[See rule 4(4)]

Certificate of Enrolment issued under the Karnataka Tax on Professions, Trades, Callings and Employments Act, 1976

Enrolment No........... Date of enrolment............

This is to certify that (Name of proprietor/partners/ others)........ engaged in the Profession/Trade/Calling (Name and style of business/profession)............ located at (Place of business / profession) .....................has been enrolled under the above mentioned Act.

The holder of this Certificate has additional places of work (branches), at the following address in the State

1.

2.

The holder of the certificate shall pay the tax at the rates specified in the schedule to the Karnataka Tax on Professions, Trades, Callings and Employments Act, 1976 or at such rates as may be revised from time to time on or before the $30^{th}$ April of every year/on or before thirty days from the date of first enrolment in the manner prescribed under rule 19 of the Karnataka Tax on Professions, Trades, Callings and Employments Rules, 1976.

Office Seal

Place: Signature

Date: Designation

------------------------------------------------------------------------------------------------------------------------

***Note:** 1. Professions Tax is also payable for each branch as per Explanation to Section 2(h) read with Explanation VI to the Schedule of the Karnataka Tax on Professions, Trades, Callings and Employments Act, 1976.

2. Professions Tax is not payable by an individual who has attained the age of sixty five years."

**3. Amendment of Form5-A.-** In Form 5-A of the said rules, in item (5),

(1) in sub-item (b), in column (3), for the letters and figures "Rs.30.00", the word "Exempted" shall be substituted;

(2) in sub-item (c), in column (3), for the letters and figures "Rs.60.00", the word "Exempted" shall be substituted;

(3) in sub-item (d), in column (3), for the letters and figures "Rs.100.00", the word "Exempted" shall be substituted;

By Order and in the name of the Governor of Karnataka,

**K.MOHAN**
Desk Officer,
Finance Department (C.T.-I)

**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೯೦೧ |
|---|---|---|

**ರಾಜ್ಯ ಚುನಾವಣಾ ಆಯೋಗ, ಕರ್ನಾಟಕ**

**ನಂ. 8, 1ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು – 560052**

**ಅಧಿಸೂಚನೆ**

**ನಂ. ರಾಚುಆ 22 ಇಯುಬಿ 2009, ದಿನಾಂಕ, 23ನೇ ಸೆಪ್ಟೆಂಬರ್, 2009**

ರಾಜ್ಯ ಚುನಾವಣಾ ಆಯೋಗವು ಅಧಿಸೂಚನೆ ಸಂಖ್ಯೆ:ರಾಚುಆ 22 ಇಯುಬಿ 2009, ದಿ:30–7–09ರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವಾರ್ಡ್ ಮತದಾರರ ಪಟ್ಟಿ ತಯಾರಿಸುವ ಬಗ್ಗೆ ಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಬೊಮ್ಮನಹಳ್ಳಿ, ಅರಕೆರೆ, ಹೆಚ್.ಎಸ್.ಆರ್.ಬಡಾವಣೆ ಉಪವಿಭಾಗಕ್ಕೆ ಶ್ರೀ ಎಂ.ಬಾಬು, ಸಹಾಯಕ ಕಂದಾಯ ಅಧಿಕಾರಿ ಇವರನ್ನು ಸಹಾಯಕ ಮತದಾರರ ನೊಂದಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಅಪರ ಆಯುಕ್ತರು (ಆಡಳಿತ) ಹಾಗೂ ಜಿಲ್ಲಾ ಚುನಾವಣಾ ಅಧಿಕಾರಿ (ಕೇಂದ್ರ) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರವರು ದಿ:15–9–09ರ ಪತ್ರ ಸಂ.ಇಎಲ್‌ಎನ್/ಪಿಆರ್(3)36/2009–10ರಲ್ಲಿ ಸದರಿ ಅಧಿಕಾರಿಯವರು ವೈದ್ಯಕೀಯ ಆಧಾರದ ಮೇಲೆ 1958 ಕೆ.ಸಿ.ಎಸ್.ಆರ್.ನಿಯಮ 285(1)ಎ ಅನ್ವಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸೇವೆಯಿಂದ ದಿ:30–8–09ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸ್ವಯಂನಿವೃತ್ತಿ ಹೊಂದಿರುತ್ತಾರೆ. ಸದರಿಯವರ ಸ್ಥಾನಕ್ಕೆ ಶ್ರೀಮತಿ ಶಶಿಕಲಾ, ಕಂದಾಯಾಧಿಕಾರಿ–1 ಅಧಿಕ ಪ್ರಭಾರ ಬೊಮ್ಮನಹಳ್ಳಿ ಇವರನ್ನು ನೇಮಕ ಮಾಡುವಂತೆ ತಿಳಿಸಿರುತ್ತಾರೆ. ಆದ್ದರಿಂದ 30–7–09ರ ಅಧಿಸೂಚನೆಯಲ್ಲಿ ಕ್ರ.ಸಂ.8 ಬೊಮ್ಮನಹಳ್ಳಿ ವಲಯ ಇಲ್ಲಿ ಶ್ರೀ ಎಂ.ಬಾಬು ರವರ ನೇಮಕವನ್ನು ರದ್ದುಪಡಿಸಿ ಇವರ ಸ್ಥಳಕ್ಕೆ ಶ್ರೀಮತಿ ಶಶಿಕಲಾ ಇವರನ್ನು ನೇಮಿಸಿದೆ.

ಆದೇಶದ ಮೇರೆಗೆ

**ಅಧೀನ ಕಾರ್ಯದರ್ಶಿ**
ರಾಜ್ಯ ಚುನಾವಣಾ ಆಯೋಗ

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೪, ೨೦೦೯ (ಆಶ್ವಯುಜ ೨, ಶಕ ವರ್ಷ ೧೯೩೧) | ನಂ. ೯೦೨ |
|---|---|---|

**FOOD, CIVIL SUPPLIES AND CONSUMER AFFAIRS SECRETARIAT**

**NOTIFICATION**

**No. FCS 74 SLF 2008, Bangalore, Dated : 24$^{TH}$ August, 2009**

The draft of the following rules further to amend the Karnataka Consumer protection (State Commission and district Forum) (Cadre & Recruitment) Rules, 2003, which the Government of Karnataka proposes to make, in exercise of powers conferred by sub-section (1) of Section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of persons likely to be affected thereby, and notice is hereby given that the said draft will be taken into consideration after fifteen days from the date of its publication in the official gazette.

Any objections or suggestions which may be received by the State Government from any person with respect of the said draft before the expiry of the period specified above will be considered by the State Government the Objections or suggestions may be addressed to the Secretary to Government, Food, Civil Supplies and Consumer Affairs Department, Vikasa Soudha, Bangalore – 560 001.

**DRAFT RULES**

**1. Title and commencement,-** (1) These rules may be called the Karnataka Consumer Protection (State Commission and District forum) (Cadre and Recruitment) (Amendment) Rules, 2009.

(2) They shall come into force from the date of their publication in the Official Gazette.

**2. Amendment to Schedule -** In the schedule to the Karnataka Consumer Protection (State Commission and District Forum) (Cadre and Recruitment) Rules, 2003, in the entries relating to the

category of posts of "Registrar-cum Administrative officer" at serial number 1, in column no. 4, the following shall be inserted at the end, namely :-

"Or by deputation of a Officer in the cadre of KAS (Senior Scale)"

By order and in the name of the Governor of Karnataka,

**RAMESH K. JAGIRDAR**
Under Secretary to Government
Food, Civil Supplies and Consumer Affairs Department

**ವಿಶೇಷ ಪತ್ರಿಕೆ**

| ಭಾಗ – VI | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨೫, ೨೦೦೯ (ಆಶ್ವಯುಜ ೩, ಶಕ ವರ್ಷ ೧೯೩೧) | ನಂ. ೯೦೩ |
|---|---|---|

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ.**
**ಅಧಿಸೂಚನೆ**

**ಸಂಖ್ಯೆ : ಇಎನ್‌ಎನ್ 2 ಸಿಆರ್ 76/2006–07 ದಿನಾಂಕ : 22ನೇ ಸೆಪ್ಟೆಂಬರ್, 2009**

**ವಿಷಯ :** ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕು ಮಡಿವಾಳ ಗ್ರಾಮ ಪಂಚಾಯ್ತಿಯ ಕೇಂದ್ರಸ್ಥಾನವನ್ನು ಚೊಕ್ಕಂಡಹಳ್ಳಿ ಗ್ರಾಮಕ್ಕೆ ನಿಗಧಿಪಡಿಸಲು ಸರ್ಕಾರ ಅನುಮತಿಸಿರುವ ಕುರಿತು.

**ಉಲ್ಲೇಖ :** 1. ಸರ್ಕಾರದ ಪತ್ರದ ಸಂಖ್ಯೆ ಗ್ರಾಆಪ 31 ಗ್ರಾಪಸ 2009 ದಿ : 1/7/2009.
2. ಈ ಕಛೇರಿಯ ಕರಡು ಅಧಿಸೂಚನೆ ಸಮಸಂಖ್ಯೆ ದಿನಾಂಕ: 14/7/2009.

.. .. .. ..

ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕು ಮಡಿವಾಳ ಗ್ರಾಮ ಪಂಚಾಯಿತಿಯ ಕೇಂದ್ರಸ್ಥಾನವನ್ನು ಚೊಕ್ಕಂಡಹಳ್ಳಿ ಗ್ರಾಮಕ್ಕೆ ನಿಗಧಿಪಡಿಸಲು ಸರ್ಕಾರವು ತನ್ನ ಪತ್ರ ಸಂಖ್ಯೆ : ಗ್ರಾಆಪ 31 ಗ್ರಾಪಸ 2009 ದಿನಾಂಕ : 1/7/2009 ರಂತೆ ಅನುಮತಿ ನೀಡಿರುತ್ತೆ.

ಈ ಮೇರೆಗೆ ದಿನಾಂಕ : 14/7/2009 ರಂದು ಕರಡು ಅಧಿಸೂಚನೆಯನ್ನು ದಿನಾಂಕ : 17/9/2009 ರ ಕರ್ನಾಟಕ ರಾಜ್ಯಪತ್ರದ ವಿಶೇಷ ಪತ್ರಿಕೆಯಲ್ಲಿ ಪ್ರಚುರಪಡಿಸಿ ಸಾರ್ವಜನಿಕರಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಸಲ್ಲಿಸಲು ಅವಕಾಶ ನೀಡಲಾಗಿತ್ತು. ಕರಡು ಅಧಿಸೂಚನೆಯ ಪ್ರಕಟಣೆಯ ಮೇರೆಗೆ ಸ್ವೀಕೃತವಾದ ಆಕ್ಷೇಪಣಾ ಅರ್ಜಿಗಳನ್ನು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಕಲಂ 4(3) ರಂತೆ ವಿಚಾರಣೆಗಾಗಿ ದಾಖಲಿಸಿಕೊಂಡು ದಿನಾಂಕ : 10–9–2009 ರಂದು ಪ್ರಕರಣವನ್ನು ಕೈಗೊಂಡು ಆಕ್ಷೇಪಣಾ ಅರ್ಜಿಯನ್ನು ವಜಾಗೊಳಿಸಿ ಪ್ರಕರಣವನ್ನು ಇತ್ಯರ್ಥಪಡಿಸಿರುತ್ತೆ. ಆದುದರಿಂದ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ (ಕರ್ನಾಟಕ ಅಧಿನಿಯಮ 14) ಪ್ರಕರಣ 4 ರ ಉಪ ಪ್ರಕರಣ (2) ರಂತೆ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಎನ್.ಪ್ರಭಾಕರ್, ಭಾ.ಆ.ಸೇ., ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ಆದ ನಾನು ಈ ಕೆಳಕಂಡ ಕೋಷ್ಠಕದಲ್ಲಿ ನಮೂದಿಸಿರುವಂತೆ ಮಾಲೂರು ತಾಲ್ಲೂಕು ಮಡಿವಾಳ ಗ್ರಾಮ ಪಂಚಾಯಿತಿಯ ಕೇಂದ್ರಸ್ಥಾನವನ್ನು ಚೊಕ್ಕಂಡಹಳ್ಳಿ ಎಂಬುದಾಗಿ ಉಲ್ಲೇಖ (1) ರ ಸರ್ಕಾರದ ಪತ್ರದಲ್ಲಿನ ನಿರ್ದೇಶನದಂತೆ ನಿಗಧಿಪಡಿಸಿ ಅಧಿಸೂಚಿಸಿದೆ.

**ಕೋಷ್ಠಕ**

| ಜಿಲ್ಲೆ | ತಾಲ್ಲೂಕು | ಹಾಲಿ ಇರುವ ಗ್ರಾಮ ಪಂಚಾಯ್ತಿ ಕೇಂದ್ರಸ್ಥಾನ | ಹೊಸದಾಗಿ ಸ್ಥಾಪಿಸಲಾದ ಕೇಂದ್ರಸ್ಥಾನ |
|---|---|---|---|
| ಕೋಲಾರ | ಮಾಲೂರು | ಮಡಿವಾಳ | ಚೊಕ್ಕಂಡಹಳ್ಳಿ |

**ಎನ್.ಪ್ರಭಾಕರ್**
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ.

